


# ವಾರ್ಷಿಕ ಪ್ರಶಸ್ತಿಗಳು

1997 ★ 1998 ★ 1999 ★ 2000



ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ನಿರ್ದೇಶನಾಲಯ
ಧನ್ವಂತರಿ ರಸ್ತೆ, ಬೆಂಗಳೂರು - 560 009

## ವಾರ್ಷಿಕ ಪ್ರಶಸ್ತಿಗಳು

ಆಯುರ್ವೇದ, ಯುನಾನಿ, ಸಿದ್ಧ, ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಹಾಗೂ ಹೋಮಿಯೋಪತಿ ಇವು ಕರ್ನಾಟಕ ರಾಜ್ಯ ಸರ್ಕಾರದ ಭಾರತೀಯ ವೈದ್ಯಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಮುಖ್ಯ ಆರೋಗ್ಯ ಸೇವೆಗಳು. ಈ ಪದ್ಧತಿಗಳಲ್ಲಿ ಸ್ಮರಣೀಯ ಸೇವೆ ಸಲ್ಲಿಸಿರುವ 5 ಜನ ವೈದ್ಯರುಗಳಿಗೆ ಈ ಕೆಳಕಂಡಂತೆ ತಲಾ ರೂ.500-00 ಗಳಂತೆ ಜೀವಾವಧಿ ಮಾಸಿಕ ಪಿಂಚಣಿಯನ್ನು ನೀಡುವ ಯೋಜನೆಯನ್ನು 1981ರಲ್ಲಿ ಕರ್ನಾಟಕ ರಾಜ್ಯ ಸರ್ಕಾರವು ಜಾರಿಗೆ ತಂದಿತು.

| | | |
|---|---|---|
| ಆಯುರ್ವೇದ | - | ಮೂರು ಜನರಿಗೆ |
| ಯುನಾನಿ | - | ಒಬ್ಬರಿಗೆ |
| ಪ್ರಕೃತಿ ಚಿಕಿತ್ಸೆ ಮತ್ತು ಯೋಗ | - | ಒಬ್ಬರಿಗೆ |
| ಹೋಮಿಯೋಪತಿ | - | ಒಬ್ಬರಿಗೆ |

1981 ರಿಂದ 1984 ರ ವರೆಗೆ ಈ ಯೋಜನೆಯಲ್ಲಿ ಜಾರಿಯಲ್ಲಿದ್ದ ವಿವಿಧ ಪದ್ಧತಿಯ 20 ಜನ ವೈದ್ಯರುಗಳು ಗೌರವ ಮಾಸಾಶನ ಸೌಲಭ್ಯವನ್ನು ಪಡೆದಿರುತ್ತಾರೆ. ಅನಂತರ ಸರ್ಕಾರವು 1985 ರಲ್ಲಿ ಈ ಯೋಜನೆಯಲ್ಲಿ ಸ್ವಲ್ಪ ಬದಲಾವಣೆಮಾಡಿ ವಿವಿಧ ಪದ್ಧತಿಗಳ 6 ಜನ ವೈದ್ಯರಿಗೆ ತಲಾ ರೂ. 250-00 ರಂತೆ ಮಾಸಾಶನ ಕೊಡಲು ಈ ಕೆಳಕಂಡ ಪದ್ಧತಿಗಳಲ್ಲಿ ಗಣನೀಯ ಸೇವೆಸಲ್ಲಿಸಿದ ವೈದ್ಯರಿಗೆ ಸ್ವರ್ಣ ಪದಕಗಳನ್ನು ನೀಡಿ ಶಾಲು ಹೊದಿಸಿ ಗೌರವಿಸಲು ಸರ್ಕಾರವು ಆದೇಶ ಹೊರಡಿಸಿದೆ.

| ವೈದ್ಯ ಪದ್ಧತಿಗಳು | ಮಾಸಾಶನ | ಪದಕಗಳು |
|---|---|---|
| ಆಯುರ್ವೇದ | 3 ಜನರಿಗೆ | 1 ಧನ್ವಂತರಿ ಸ್ವರ್ಣ ಪದಕ |
| ಯುನಾನಿ | ಒಬ್ಬರಿಗೆ | 1 ಅವಿಸಿನ್ನ ಸ್ವರ್ಣ ಪದಕ |
| ಹೋಮಿಯೋಪತಿ | ಒಬ್ಬರಿಗೆ | 1 ಹ್ಯಾನಿಮನ್ ಸ್ವರ್ಣ ಪದಕ |
| ್ರಕೃತಿ ಚಿಕಿತ್ಸೆ ುತ್ತು ಯೋಗ | ಒಬ್ಬರಿಗೆ | 1 ಪತಂಜಲಿ ಸ್ವರ್ಣ ಪದಕ |

ಈ ಯೋಜನೆಯ ಪ್ರಕಾರ 1985-86 ರಿಂದ 2000ವರೆಗೆ ವಿವಿಧ ಪದ್ಧತಿಗಳಲ್ಲಿ ಗಣನೀಯ ಸೇವೆ ಸಲ್ಲಿಸಿರುವ 47 ಜನ ವೈದ್ಯರುಗಳಿಗೆ ಸ್ವರ್ಣ ಪದಕಗಳನ್ನು ಮತ್ತು 69 ಜನ ವೈದ್ಯರುಗಳಿಗೆ ತಲಾ ರೂ. 250-00 ರಂತೆ ಗೌರವ ಮಾಸಾಶನ ನೀಡಲಾಗಿದೆ.

1997, 1998, 1999 ಮತ್ತು 2000ನೇ ಸಾಲಿನಲ್ಲಿ ಈ ಕೆಳಕಂಡ 14 ವೈದ್ಯರುಗಳಿಗೆ ್ವರ್ಣಪದಕಗಳನ್ನು ಮತ್ತು 24 ಜನ ವೈದ್ಯರುಗಳಿಗೆ ಗೌರವ ಮಾಸಾಶನವನ್ನು ತಾ॥ 1.11.97, 1.11.98, 1.11.99 ಮತ್ತು 1.11.2000 ರಿಂದ ಮಂಜೂರು ಮಾಡಿ ರಾಜ್ಯ ಸರ್ಕಾರವು ಆದೇಶ ್ರಡಿಸಿದೆ.

# 1997ನೇ ಸಾಲಿನ ಸ್ವರ್ಣಪದಕ ಹಾಗೂ ಮಸಾಶನ ಪಡೆದವರು

## ಮಾಸಾಶನ

### ಆಯುರ್ವೇದ ಪದ್ಧತಿ :

**ಡಾ|| ಕೆ.ವಿ. ಭಾಸ್ಕರ**
ಶಿವಳ್ಳಿ, ದುದ್ದ ಹೋಬಳಿ
ಮಂಡ್ಯ ಜಿಲ್ಲೆ, ಮಂಡ್ಯ 571 405..

**ಡಾ|| ಹೆಚ್. ಎಂ. ಚನ್ನವೀರಯ್ಯ**
ಹಿರೇಹಡಗಲಿ ತಾ. ಹೂವಿನ ಹಡಗಲಿ
ಬಳ್ಳಾರಿ ಜಿಲ್ಲೆ

**ಡಾ|| ಕೆ. ಕೃಷ್ಣಪ್ಪ**
ನಂ. 2869, 4ನೇ ಅಡ್ಡರಸ್ತೆ
1ನೇ ಮುಖ್ಯರಸ್ತೆ, ಚಾಮುಂಡಿಪುರ,
ಮೈಸೂರು

### ಹೋಮಿಯೋಪತಿ :

**ಡಾ|| ಎಲ್.ವಿ. ರಂಗಂ**
ಯಾದಗಿರಿ
ಗುಲ್ಬರ್ಗಾ ಜಿಲ್ಲೆ

### ಯುನಾನಿ ಪದ್ಧತಿ :

**ಡಾ|| ಪಿ.ಕೆ. ಅಬ್ದುಲ್ ಮಜೀದ್ ಶೇಟ್ ಅಸಾದಿ**
ನಂ. 205, ಬಡಾಮಖಾನ್
ಟಿಪ್ಪು ಸರ್ಕಲ್, ಮೈಸೂರು - 570 007.

### ಪ್ರಕೃತಿ ಚಿಕಿತ್ಸೆ ಮತ್ತು ಯೋಗ :

ಶ್ರೀ ಬ್ರಹ್ಮಾನಂದ ಸರಸ್ವತಿ
ಯೋಗ ವೇದಾಂತ ಪೀಠ ಮಹಾವಿದ
ಮತ್ತಿಕೊಪ್ಪ, ಅಂಚೆ ಕಲ್ಮನೆ
ತಾ. ಸಾಗರ, ಶಿವಮೊಗ್ಗ ಜಿಲ್ಲೆ

## ಸ್ವರ್ಣಪದಕ

### ಧನ್ವಂತರಿ ಸ್ವರ್ಣಪದಕ (ಆಯುರ್ವೇದ)

**ಡಾ || ಚನ್ನಬಸಪ್ಪ**
ನಿವೃತ್ತ ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿಗಳು
ಮತ್ತು ಹೋಮಿಯೋಪತಿ ಇಲಾಖೆ
ಸಂಖ್ಯೆ : 116, ಸಿದ್ದಾರ್ಥಲೇಔಟ್, ಮೈಸೂರು

### ಹೋಮಿಯೋಪತಿ ಹ್ಯಾನಿಮನ್ ಸ್ವರ್ಣಪದಕ

**ಡಾ || ಎಸ್. ಎಸ್. ಆದಿ**
'' ಜ್ಯೋತಿ ನಂ. 2558,
ಮಾಳ ಮಾರುತಿ ವಿಸ್ತರಣೆ
ಬೆಳಗಾವಿ - 590016

### ಯುನಾನಿ - ಅವಿಸಿನ್ನ ಸ್ವರ್ಣಪದಕ

**ಡಾ || ಹಿಸಾಮುದ್ದೀನ್,**
ಸಿಂಧನೂರು, ರಾಯಚೂರು ಜಿಲ್ಲೆ

### ಪ್ರಕೃತಿ ಚಿಕಿತ್ಸೆ ಮತ್ತು ಯೋಗ - ಪತಂಜಲಿ ಸ್ವರ್ಣಪದಕ

**ಡಾ|| ಸತ್ಯನಾರಾಯಣಮೂರ್ತಿ**
ಹಿರಿಯ ವೈದ್ಯಾಧಿಕಾರಿ
ಐ.ಎನ್.ವೈ.ಎಸ್., ಜಿಂದಾಲ್ ನಗರ
ಬೆಂಗಳೂರು

# 1998ನೇ ಸಾಲಿನ ಸ್ವರ್ಣಪದಕ ಹಾಗೂ ಮಸಾಶನ ಪಡೆದವರು

## ಮಾಸಾಶನ

**ಆಯುರ್ವೇದ ಪದ್ಧತಿ:**

**ಡಾ|| ಕೆ. ಅಶ್ವತ್ ನಾರಾಯಣಿ ದೀಕ್ಷಿತ್**
ಕೆರೆಬೀದಿ, ಮಂಡ್ಯ ನಗರ

**ಡಾ|| ಲಕ್ಷ್ಮಣರಾವ್ ಪಟೇಗಾರ್**
ಮುನಿವರ ಪಾಶಾ ದರ್ಗಾ
ರಂಗಂ ಪೇಟೆ -535220
ಸುರಪುರ ತಾ. ಗುಲ್ಬರ್ಗಾ ಜಿಲ್ಲೆ

**ಡಾ|| ಪಿ. ರಾಮಚಂದ್ರಯ್ಯ** ಆರ್.ಎಂ.ಪಿ.
ರಾಂರಾಂ ಮೆಡಿಕಲ್ ಹೌಸ್
ಬಳೇಪೇಟೆ ಎಲಂದೂರ್ 571441
ಚಾಮರಾಜನಗರ ಜಿಲ್ಲೆ

**ಹೋಮಿಯೋಪತಿ :**

**ಡಾ|| ಆರ್.ಹೆಚ್.ಶೆಟ್ಟಿ**
ಶಾರದ ಕ್ಲಿನಿಕ್, ಪೋಸ್ಟ್ ಆಫೀಸ್ ರಸ್ತೆ
ಹರಿಹರ - 577 601.

**ಯುನಾನಿ:**

**ಡಾ|| ಮಹಮ್ಮದ್ ಕಲ್ಲಿಮುಲ್ಲಾ**
ಮನೆ ನಂ. 18, ಸಂತೆಪೇಟೆ
ಮಸೀದಿ ರಸ್ತೆ, ತುಮಕೂರು

**ಪ್ರಕೃತಿ ಚಿಕಿತ್ಸೆ ಮತ್ತು ಯೋಗ :**

**ಶ್ರೀ ಲಕ್ಷ್ಮಣ ಸಂದ್ರ ಗೋವಿಂದರಾವ್**
ಕೃಷ್ಣಮೂರ್ತಿ, ತುಮಕೂರು

## ಸ್ವರ್ಣಪದಕ

**ಧನ್ವಂತರಿ ಸ್ವರ್ಣ ಪದಕ (ಆಯುರ್ವೇದ)**

**ಡಾ || ಎಸ್. ಎನ್. ಮಾದವಸ್ವಾಮಿ**
ನಂ. 460- ಜಿ, 6ನೇ ಅಡ್ಡರಸ್ತೆ
ಜಯನಗರ 7ನೇ ಹಂತದ ಬಡಾವಣೆ
ಬೆಂಗಳೂರು - 5600 82

**ಹೋಮಿಯೋಪತಿ ಹ್ಯಾನಿಮನ್ ಸ್ವರ್ಣಪದಕ:**

**ಡಾ || ವಿ. ಟಿ. ಡಿಸೋಜ**
ಮೊದಲನೇ ಅಂತಸ್ತು, ಪ್ರಸಾದ್ ಅ ಪಾರ್ಟ್‌ಮೆಂಟ್
ಬೆಂದೂರ್‌ವೆಲ್‌ಜಂಕ್ಷನ್, ಬಲ್‌ಮರ್ ರಸ್ತೆ,
ಕಂಕನಾಡಿ, ಮಂಗಳೂರು.

**ಯುನಾನಿ ಪದ್ದತಿ ಅವಿಸಿನ್ನ ಸ್ವರ್ಣಪದಕ**

**ಡಾ|| ಮಜರುಲ್ಲಾ ಹಸನ್**
ನಂ. 366, ಮೂರನೇ ಕ್ರಾಸ್,
1ನೇ ಬ್ಲಾಕ್, ಆರ್.ಟಿ.ನಗರ
ಬೆಂಗಳೂರು - 560 032

**ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಪತಂಜಲಿ ಸ್ವರ್ಣಪದಕ:**

**ಶ್ರೀ ಎ. ಎಸ್. ನರಸಿಂಹಮೂರ್ತಿ**
ನಂ. 65, ಇನ್‌ಕಂ ಟ್ಯಾಕ್ಸ್ ಲೇಔಟ್
ಅತ್ತಿಗುಪ್ಪೆ, ವಿಜಯನಗರ ಎಕ್ಸ್‌ಟೆನ್‌ಷನ್
ಬೆಂಗಳೂರು - 40

## 1999ನೇ ಸಾಲಿನ ಸ್ವರ್ಣಪದಕ ಹಾಗೂ ಮಸಾಶನ ಪಡೆದವರು

### ಮಾಸಶಾನ

**ಆಯುರ್ವೇದ ಪದ್ಧತಿ :**

**ಶ್ರೀ ಮಹದೇವಗೌಡ ವೀರನಗೌಡ ಪಾಟೀಲ**
ಬಿನ್ ವೀರನಗೌಡ
ಕದರ ಮಂಡಲಗಿ
ಬ್ಯಾಡಗಿ ತಾ. ಹಾವೇರಿ ಜಿಲ್ಲೆ

**ಗಜುಲ್ಲು ನಾಗಯ್ಯ ಬಿನ್ ಲಿಂಗಪ್ಪ**
ಚಾಮುಂಡಮ್ಮ ಕಾಂಪೌಂಡ್
ವೇಣುಗೋಪಾಲಸ್ವಾಮಿ ದೇವಸ್ಥಾನ ಹತ್ತಿರ
ಹೊಸಪೇಟೆ, ಬಳ್ಳಾರಿ

**ಸೈಯದ್ ಮುರ್ತಜಾ ಮದುಶಾ**
ಆಯುರ್ವೇದ ಪ್ರಾಕ್ಟೀಷನರ್
ಸಾ. ಬೆಳಕೆರೆ ತಾ. ಅಂಕೋಲಾ
ಉತ್ತರ ಕನ್ನಡ ಜಿಲ್ಲೆ

**ಹೋಮಿಯೋಪತಿ :**

**ಬಾಗಡಿ ಕೃಷ್ಣಪ್ಪ**
ಬಿನ್. ಸಿ. ಬಿ. ಕೃಷ್ಣಪ್ಪ
ನಂ. 1047/46 2ನೇ ಮುಖ್ಯರಸ್ತೆ
5ನೇ ಕ್ರಾಸ್, ವಿದ್ಯಾರಣ್ಯಪುರಂ,
ಮೈಸೂರು - 8

**ಯುನಾನಿ ಪದ್ಧತಿ :**

**ಸೈಯದ್ ನಫೀಜ್‌ಉಲ್ಲಾ ಹುಸೇನ್**
ಬಿನ್ ಸೈಯದ್ ನಿರಾಜುಲ್ಲಾ ಹಸನ್
ಸ್ಟೇಷನ್ ರಸ್ತೆ, ಚಿತ್ತಾಪುರ ಅಂಚೆ
ಗುಲ್ಬರ್ಗಾ

**ಪ್ರಕೃತಿ ಚಿಕಿತ್ಸೆ ಮತ್ತು ಯೋಗ :**

**ಶ್ರೀ ಭಾಸ್ಕರಾಚಾರ್ಯ**
ಶ್ರೀ ಬ್ರಹ್ಮಾನಂದ ಯೋಗಾಶ್ರಮ
ಬಿ.ಹೆಚ್. ಬೈಪಾಸ್ ರಸ್ತೆ, ಯರಂದೂರು
ಭದ್ರಾವತಿ ತಾ. ಶಿವಮೊಗ್ಗ ಜಿಲ್ಲೆ

### ಸ್ವರ್ಣಪದಕ

**ಧನ್ವಂತರಿ ಸ್ವರ್ಣ ಪದಕ (ಆಯುರ್ವೇದ)**

**ಡಾ || ಜಯಪ್ರಕಾಶ್ ನಾರಾಯಣ್**
93, 3ನೇ ಕ್ರಾಸ್, 1ನೇ ಹಂತ
ಡಾಲರ್‌ಸ್ಕೀಂ, ಬಿಟಿಎಂ ಲೇಔಟ್
ಬೆಂಗಳೂರು

**ಹೋಮಿಯೋಪತಿ ಹ್ಯಾನಿಮನ್ ಸ್ವರ್ಣಪದಕ:**

**ಡಾ || ಕೆ. ವಿ. ಸುಬ್ಬರಾವ್**
ನಂ. 72, 8ನೇ ಮೈನ್
ಬಿಕಾಶಿಪುರ ಲೇಔಟ್, ಬೆಂಗಳೂರು-61

**ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಪತಂಜಲಿ ಸ್ವರ್ಣಪದಕ:**

**ಶ್ರೀ ಜಿ. ವೀರ ಭದ್ರಪ್ಪ**
2541/3, ಎಂ. ಸಿ.ಸಿ., ಎ.ಬ್ಲಾಕ್
ಉರ್ದುಸ್ಕೂಲ್ ಎದುರು
ದಾವಣಗೆರೆ - 577004

## 2000ನೇ ಸಾಲಿನ ಸ್ವರ್ಣಪದಕ ಹಾಗೂ ಮಸಾಶನ ಪಡೆದವರು

### ಮಾಸಾಶನ

**ಆಯುರ್ವೇದ ಪದ್ಧತಿ :**

**ಡಾ|| ಬಿ. ಸುಮಿತ್ರಮ್ಮ**
ನಂ. 21, 4ನೇ ಮೈನ್, 9ನೇ ಅಡ್ಡರಸ್ತೆ,
ಆರ್.ಕೆ. ಲೇ ಔಟ್ ಪದ್ಮನಾಭನಗರ
ಬೆಂಗಳೂರು- 560 070

**ಡಾ|| ಆರ್. ಮುನಿಕೃಷ್ಣಪ್ಪ**
ಬಿನ್ ರಾಮಯ್ಯ ಚನ್ನಾಪುರ
ಕಾಮಧೇನು ಹಳ್ಳಿ ಅಂಚೆ,
ಕೋಲಾರ ತಾಲ್ಲೂಕು ಮತ್ತು ಜಿಲ್ಲೆ

**ಡಾ|| ಚನ್ನವೀರಯ್ಯ ಅಂದಾನಯ್ಯ ಮಠದ ಹಳ್ಳಿಕೇರಿ**
ನವಲಗುಂದ ತಾಲ್ಲೂಕು
ಧಾರವಾಡ ಜಿಲ್ಲೆ

**ಹೋಮಿಯೋಪತಿ ಪದ್ಧತಿ :**

**ಡಾ|| ಜಾರ್ಜ್ ವಿಲಿಯಂ ಬಿ.ಸಿ.**
ನಂ. 3. ಗರೀಬಿಸ್ಪೈಟ್
ಚನ್ನಗೌಡ ಬಡಾವಣೆ
ಮದ್ದೂರು ಟೌನ್
ಮಂಡ್ಯ ಜಿಲ್ಲೆ - 571 428

**ಯುನಾನಿ ಪದ್ಧತಿ :**

**ಡಾ|| ಎಂ.ಎ. ನಿಸಾರ್ ಅಹಮದ್**
ಗೌನಿಯ ಸಾರಾಯಿ
ಒ.ಟಿ.ಸಿ. ರಸ್ತೆ, ಕಾಟನ್‌ಪೇಟೆ
ಬೆಂಗಳೂರು

**ಪ್ರಕೃತಿ ಚಿಕಿತ್ಸೆ ಮತ್ತು ಯೋಗ :**

**ಶ್ರೀ ಎ.ಬಿ. ಬಿರಾದಾರ್**
ಪ್ರಶಾಂತನಗರ, ಬಿ. ಶಹಬಾದ್
ಹಿಗರೋಡ್, 0 ರಾಜಾಪುರ
ಗುಲ್ಬರ್ಗಾ

### ಸ್ವರ್ಣಪದಕ

**ಧನ್ವಂತರಿ ಸ್ವರ್ಣ ಪದಕ (ಆಯುರ್ವೇದ)**

**ಡಾ || ಸೀತಾರಾಮ್ ಪಿ. ಆರ್.**
ಶ್ರೀ. ಸೀತಾರಾಘವ ವೈದ್ಯಶಾಲಾ
ರಾಮಸ್ವಾಮಿ ಸರ್ಕಲ್, ಮೈಸೂರು - 570 024

**ಯುನಾನಿ ಅವಿಸಿನ್ನ ಸ್ವರ್ಣಪದಕ:**

**ಡಾ || ಸಯ್ಯದ್ ಅಹಮದುಲ್ಲಾ**
ನಂ. 7/1, 9ನೇ ಕ್ರಾಸ್,
ಚಿನ್ನಪ್ಪ ಗಾರ್ಡನ್, ಬೆಂಗಳೂರು-46

**ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಪತಂಜಲಿ ಸ್ವರ್ಣಪದಕ:**

**ಶ್ರೀ ಬಿ. ಎನ್. ಬ್ರಹ್ಮಾಚಾರ್ಯ**
ಗೌರವ ಕಾರ್ಯದರ್ಶಿ, ಪ್ರಕೃತಿ ಜೀವನಕೇಂದ್ರ
ಗಾಂಧಿ ಸಾಹಿತ್ಯ ಸಂಘ
8ನೇ ಕ್ರಾಸ್, ಮಲ್ಲೇಶ್ವರಂ
ಬೆಂಗಳೂರು - 560 008



ಡಾ|| ಚನ್ನಬಸಪ್ಪ

## ಆಯುರ್ವೇದ ಪದ್ಧತಿ

ಡಾ. ಚನ್ನಬಸಪ್ಪ ರವರು ಚಾಮರಾಜನಗರ ಜಿಲ್ಲೆಯ ಹೆಚ್. ಮೂಖಹಳ್ಳಿಯಲ್ಲಿ 1932 ರಲ್ಲಿ ಜನಿಸಿರುತ್ತಾರೆ. 1958 ರಲ್ಲಿ ಆಯುರ್ವೇದ ಪದವಿಯನ್ನು ಪಡೆದು 1959ರಲ್ಲಿ ಸರ್ಕಾರಿ ಸೇವೆಗೆ ಸೇರಿ ಬೀದರ್ ಜಿಲ್ಲೆಯ ಚಿಕಿತ್ಸಾಲಯದಲ್ಲಿ ತಮ್ಮ ಸೇವೆಯನ್ನು ಪ್ರಾರಂಭಿಸಿರುತ್ತಾರೆ. ನಂತರ 1962ರಲ್ಲಿ ಮೈಸೂರಿಗೆ ವರ್ಗಾವಣೆಹೊಂದಿ ಅಲ್ಲಿಯ ಸರ್ಕಾರಿ ಆಯುರ್ವೇದ ಕಾಲೇಜ್ ಆಸ್ಪತ್ರೆಯಲ್ಲಿ ಚಿಕಿತ್ಸಕ ಹುದ್ದೆಯ ಜೊತೆಗೆ ಸದರಿ ಕಾಲೇಜಿನ ಅಧ್ಯಾಪಕರಾಗಿ ಸೇವೆಸಲ್ಲಿಸಿರುತ್ತಾರೆ. ನಂತರ 1974 ರಿಂದ 1978 ರವರೆಗೆ ಮೈಸೂರಿನ ಆಯುರ್ವೇದ ಕಾಲೇಜಿನ ಪ್ರಾಚಾರ್ಯರಾಗಿ ಕಾರ್ಯನಿರ್ವಹಿಸಿ ಕಾಲೇಜಿನ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿರುತ್ತಾರೆ. ನಂತರ ರಾಜ್ಯದ ಏಕೈಕ ಆಯುರ್ವೇದ ಮತ್ತು ಯುನಾನಿ ಔಷಧಿ ತಯಾರಿಕಾ ಘಟಕವಾದ ಬೆಂಗಳೂರಿನ ಸರ್ಕಾರಿ ಕೇಂದ್ರೀಯ ಔಷಧಾಗಾರದ ಮೇಲ್ವಿಚಾರಕರಾಗಿ ಅದರ ಅಭಿವೃದ್ಧಿಗೆ ಶ್ರಮಿಸಿರುತ್ತಾರೆ. ನಂತರ ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯ ನಿರ್ದೇಶಕರಾಗಿ ಕಾರ್ಯನಿರ್ವಹಿಸಿ ಇಲಾಖೆಯ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿರುತ್ತಾರೆ. ಇವರು ನಿರ್ದೇಶಕರಾಗಿದ್ದ ಅವಧಿಯಲ್ಲಿ ಗುಲ್ಬರ್ಗದಲ್ಲಿ ಇಲಾಖೆಯ ಒಂದು ವಿಭಾಗೀಯ ಕಛೇರಿಯನ್ನು ಮತ್ತು ಆಯುರ್ವೇದದಲ್ಲಿ ಸ್ನಾತಕೋತ್ತರ ಪದವಿಯನ್ನು ಪ್ರಾರಂಭಿಸಲು ಶ್ರಮಿಸಿ ಯಶಸ್ವಿಯಾಗಿರುತ್ತಾರೆ. ಇವರು ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ವಿವಿಧ ಹುದ್ದೆಯಲ್ಲಿ ಸೇವೆ ಸಲ್ಲಿಸಿ ಇಲಾಖೆಯ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿ ಯಶಸ್ವಿಯಾಗಿ 1990 ರ ಎಪ್ರಿಲ್ ತಿಂಗಳಲ್ಲಿ ಸರ್ಕಾರಿ ಸೇವೆಯಿಂದ ನಿವೃತ್ತಿಯಾಗಿರುತ್ತಾರೆ.

ನಿವೃತ್ತಿಯ ನಂತರ ಮೈಸೂರಿನ ಖಾಸಗಿ ಆಯುರ್ವೇದಿಕ್ ಮೆಡಿಕಲ್ ಕಾಲೇಜಿನ ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿರುತ್ತಾರೆ. ಹೀಗೆ ಇವರು ಆಯುರ್ವೇದದ ಅಭಿವೃದ್ಧಿಗಾಗಿ ಶ್ರಮಿಸಿ ಯಶಸ್ವಿಯಾಗಿರುತ್ತಾರೆ.

ಇವರ ವಿಶಿಷ್ಟ ಸೇವೆಯನ್ನು ಪರಿಗಣಿಸಿ ಕರ್ನಾಟಕ ಸರ್ಕಾರವು 1997ನೇ ಸಾಲಿನ ''ಧನ್ವಂತರಿ'' ಸ್ವರ್ಣ ಪದಕವನ್ನು ನೀಡಿ ಗೌರವಿಸಿದೆ.





ಡಾ|| ಎಸ್. ಎಸ್. ಆದಿ

## ಹೋಮಿಯೋಪತಿ ಪದ್ಧತಿ

ಡಾ|| ಎಸ್. ಎಸ್. ಆದಿ ಇವರು 1936 ರಲ್ಲಿ ಒಕ್ಕಲುತನ ಮತ್ತು ವೈದ್ಯಕೀಯ ಕುಟುಂಬದಲ್ಲಿ ಧಾರವಾಡ ಜಿಲ್ಲೆಯ ರೋಣ ತಾಲ್ಲೂಕಿನ ಜಕ್ಕಲಿ ಗ್ರಾಮದಲ್ಲಿ ಜನಿಸಿರುತ್ತಾರೆ. ಇವರು ಹೋಮಿಯೋಪತಿ ಪದ್ಧತಿಯಲ್ಲಿ ಪದವಿಯನ್ನು ಪಡೆದು ಬೆಳಗಾವಿಯಲ್ಲಿಯ ಎ.ಎಂ.ಶೇಖ್. ಹೋಮಿಯೋಪತಿ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸಿ ಹೋಮಿಯೋಪತಿ ಪದ್ಧತಿಯ ಅಭಿವೃದ್ಧಿಗೆ ಶ್ರಮಿಸಿರುತ್ತಾರೆ. ಹೋಮಿಯೋಪತಿಯಲ್ಲಿ ಅನೇಕ ಪುಸ್ತಕಗಳನ್ನು ಪ್ರಕಟಿಸಿ ಜನಪ್ರಿಯರಾಗಿರುತ್ತಾರೆ. ಇವರು ಪುಣೆ ವಿಶ್ವವಿದ್ಯಾಲಯದ ಪಿ. ಹೆಚ್ ಡಿ., ಪ್ರಬಂಧಗಳಿಗೆ ನಿರ್ಣಾಯಕರಾಗಿ ಸೇವೆ ಸಲ್ಲಿಸಿದ್ದಾರೆ ಹಾಗೂ ಈಗ ರಾಜೀವ್ ಗಾಂಧಿ ವಿಶ್ವವಿದ್ಯಾಲಯದ ಎಂ.ಡಿ., ಪ್ರಬಂಧಗಳಿಗೆ ಮಾರ್ಗದರ್ಶಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಇವರು ಹೋಮಿಯೋಪತಿಯಲ್ಲಿ ಸಲ್ಲಿಸಿದ ವಿಶಿಷ್ಟ ಸೇವೆಯನ್ನು ಪರಿಗಣಿಸಿ ಕರ್ನಾಟಕ ಸರ್ಕಾರವು 1997ನೇ ಸಾಲಿನ ''ಹ್ಯಾನಿಮನ್'' ಸ್ವರ್ಣ ಪದಕವನ್ನು ನೀಡಿ ಗೌರವಿಸಿದೆ.



## ಯುನಾನಿ ಪದ್ಧತಿ

ಡಾ॥ ಸೈಯದ್ ಹಿಸ್ಸಾಮುದ್ದಿನ್ ಖಾದ್ರಿ

ಡಾ॥ ಸೈಯದ್ ಹಿಸ್ಸಾಮುದ್ದಿನ್ ಖಾದ್ರಿ ಇವರು 1944 ರಲ್ಲಿ ಬಿಜಾಪುರ ಜಿಲ್ಲೆಯ ತಾಳಿಕೋಟೆಯಲ್ಲಿ ಜನಿಸಿರುತ್ತಾರೆ. ಇವರು ತಮ್ಮ ಪ್ರಾಥಮಿಕ ಹಾಗೂ ಹೈಸ್ಕೂಲ್ ಶಿಕ್ಷಣವನ್ನು ಬಿಜಾಪುರದಲ್ಲಿ ಮುಗಿಸಿ ನಂತರ ಅಲಿಗಡ್ ಮುಸ್ಲಿಂ ವಿಶ್ವವಿದ್ಯಾಲಯದ ಹಕೀಂ ಅಜ್ಮಲ್ ಖಾನ್ ತಿಬ್ಬಿಯಾ ಕಾಲೇಜನಿಂದ ಬಿ.ಯು.ಎಂ.ಎಸ್. ಪದವಿಯನ್ನು ಪಡೆದರು. ನಂತರ ರಾಯಚೂರು ಜಿಲ್ಲೆಯ ಸಿಂಧನೂರಿನಲ್ಲಿ ತಮ್ಮ ಖಾಸಗಿ ವೈದ್ಯಕೀಯ ವೃತ್ತಿಯನ್ನು ಪ್ರಾರಂಭಿಸಿ ಅನೇಕ ರೋಗಿಗಳಿಗೆ ಯುನಾನಿ ಪದ್ಧತಿಯಲ್ಲಿ ಚಿಕಿತ್ಸೆ ನೀಡಿ ಜನಪ್ರಿಯರಾಗಿರುತ್ತಾರೆ.

ಇವರು ಯುನಾನಿ ಪಧ್ಧತಿಯಲ್ಲಿ ಸಲ್ಲಿಸಿದ ವಿಶಿಷ್ಟ ಸೇವೆಗಾಗಿ ಕರ್ನಾಟಕ ಸರ್ಕಾರವು 1997ನೇ ಸಾಲಿನ ''ಅವಿಸಿನ್ನ'' ಸ್ವರ್ಣ ಪದಕವನ್ನು ನೀಡಿ ಗೌರವಿಸಿದೆ.



ಡಾ|| ಸತ್ಯನಾರಾಯಣ ಮೂರ್ತಿ

## ಯೋಗ ಮತ್ತು ಪ್ರಕೃತಿ ಚಿಕಿತ್ಸೆ

ಡಾ|| ಸತ್ಯನಾರಾಯಣಮೂರ್ತಿಯವರು ಜುಲೈ 1942ರಲ್ಲಿ ಜನಿಸಿದ್ದು, ಬಿ.ಎ. ಪದವಿಯನ್ನು ಉಸ್ಮಾನಿಯ ವಿಶ್ವವಿದ್ಯಾಲಯದಲ್ಲಿ ಮುಗಿಸಿದ ನಂತರ ಪ್ರಕೃತಿ ಚಿಕಿತ್ಸಾ ವಿದ್ಯಾಪೀಠ, ಅಮೀರ್‌ಪೇಟ್, ಹೈದರಾಬಾದ್‌ನಿಂದ 2 ವರ್ಷದ ಪ್ರಕೃತಿ ಚಿಕಿತ್ಸಾ ಡಿಪ್ಲೊಮಾ ಪಡೆದರು. ಹೈದ್ರಾಬಾದಿನ ಪ್ರಖ್ಯಾತ ಪ್ರಕೃತಿ ಚಿಕಿತ್ಸಾ ಆಸ್ಪತ್ರೆಯಲ್ಲಿ 1965ರಿಂದ 1978ರವರೆಗೆ ವೈದ್ಯರಾಗಿ ಗಾಂಧಿ ಪ್ರಕೃತಿ ಚಿಕಿತ್ಸಾ ಕಾಲೇಜಿನ ಉಪಪ್ರಾಚಾರ್ಯರಾಗಿ ಪ್ರಖ್ಯಾತ ಜಿಂದಾಲ್ ಪ್ರಕೃತಿ ಚಿಕಿತ್ಸಾ ಮತ್ತು ಯೋಗ ಸಂಸ್ಥೆ, ಬೆಂಗಳೂರು ಇಲ್ಲಿ 1978 ರಿಂದ 1986ರವರೆಗೂ ಮುಖ್ಯ ವೈದ್ಯಾಧಿಕಾರಿಗಳಾಗಿ ಸೇವೆ ಸಲ್ಲಿಸಿರುತ್ತಾರೆ. 1986 ರಿಂದ 1999 ರವರೆಗೂ ತಾಜ್ ಹೋಟೆಲ್ ಸಮುಚ್ಚಯಗಳಲ್ಲಿ ಸಲಹಾ ವೈದ್ಯಾಧಿಕಾರಿಯಾಗಿ ಸೇವೆ ಸಲ್ಲಿಸಿರುತ್ತಾರೆ. ಬೆಂಗಳೂರು ವಿಶ್ವವಿದ್ಯಾಲಯದ ಬಿ.ಎನ್.ವೈ.ಎಸ್. ಪದವಿ ಪಠ್ಯಕ್ರಮದ ಅಡ್‌ಹಾಕ್ ಸಮಿತಿಯ ಛೇರ್‌ಮನ್‌ರಾಗಿ ಕೇಂದ್ರ ಯೋಗ ಮತ್ತು ಪ್ರಕೃತಿ ಚಿಕಿತ್ಸಾ ಕೌನ್ಸಿಲ್‌ನ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದಾರೆ. ರಾಜ್ಯ ಪ್ರಕೃತಿ ಚಿಕಿತ್ಸಾ ಸಲಹಾ ಸಮಿತಿಯ ಸದಸ್ಯರಾಗಿಯೂ 1981 ರಿಂದ 1987ರವರೆಗೂ ಸೇವೆ ಸಲ್ಲಿಸಿರುತ್ತಾರೆ.

ಇವರು ಯೋಗ ಮತ್ತು ಪ್ರಕೃತಿ ಚಿಕಿತ್ಸೆಯಲ್ಲಿ ಸಲ್ಲಿಸಲಾದ ಸೇವೆಯನ್ನು ಪರಿಗಣಿಸಿ ಕರ್ನಾಟಕ ಸರ್ಕಾರವು 1997 ರ ಸಾಲಿಗೆ ಪತಂಜಲಿ ಸ್ವರ್ಣ ಪದಕವನ್ನು ನೀಡಿ ಗೌರವಿಸಿದೆ.





ಡಾ|| ಮಾಧವಸ್ವಾಮಿ

## ಆಯುರ್ವೇದ ಪದ್ಧತಿ

ಡಾ|| ಮಾಧವಸ್ವಾಮಿ ಇವರು 1921 ರಲ್ಲಿ ಬೆಂಗಳೂರಿನಲ್ಲಿ ಜನಿಸಿರುತ್ತಾರೆ. ಇವರು ಆಯುರ್ವೇದದಲ್ಲಿ ಎಲ್.ಎ.ಎಂ.ಎಸ್., ಪದವಿಯನ್ನು ಪಡೆದು 1944 ರಿಂದ ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆ, ಬೆಂಗಳೂರು ಇಲ್ಲಿ ವೈದ್ಯರಾಗಿ ಕಾರ್ಯನಿರ್ವಹಿಸಿರುತ್ತಾರೆ. ನಂತರ 1956 ರಲ್ಲಿ ಲೋಕಾ ಸೇವಾ ಆಯೋಗದಿಂದ ಆಯ್ಕೆ ಆಗಿ ಇದೇ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸಿದ್ದು ನಂತರ 1968ರಲ್ಲಿ ಪ್ರಾಂಶುಪಾಲರಾಗಿ ಬೆಂಗಳೂರಿನ ಆಯುರ್ವೇದ ಕಾಲೇಜಿನಲ್ಲಿ ಕಾರ್ಯನಿರ್ವಹಿಸಿ ಕಾಲೇಜಿನ ಅಭಿವೃದ್ಧಿಗೆ ಶ್ರಮಿಸುವುದರ ಮೂಲಕ ಆಯುರ್ವೇದದ ಅಭಿವೃದ್ಧಿಗೆ ಸೇವೆಸಲ್ಲಿಸಿರುತ್ತಾರೆ.

ಇವರ ಸೇವೆಯನ್ನು ಪರಿಗಣಿಸಿ ಕರ್ನಾಟಕ ಸರ್ಕಾರವು 1998ನೇ ಸಾಲಿನ ''ಧನ್ವಂತರಿ'' ಸ್ವರ್ಣ ಪದಕವನ್ನು ನೀಡಿ ಗೌರವಿಸಿದೆ.



## ಹೋಮಿಯೋಪತಿ ಪದ್ಧತಿ



ಶ್ರೀ. ವಿ.ಟಿ.ಡಿಸೋಜ

ಶ್ರೀ. ವಿ.ಟಿ.ಡಿಸೋಜ ಇವರು ಕರ್ನಾಟಕ ರಾಜ್ಯದಲ್ಲಿ ಹೋಮಿಯೋಪತಿ ಪದ್ಧತಿಯನ್ನು ಅತ್ಯಂತ ಜನಪ್ರಿಯಗೊಳಿಸಲು ಪ್ರಯತ್ನಿಸಿದವರಲ್ಲಿ ಪ್ರಮುಖರು. ಇವರು ಹೋಮಿಯೋಪತಿ ಶಿಕ್ಷಣದ ವಿವಿಧ ರಂಗಗಳಲ್ಲಿ ಸೇವೆಸಲ್ಲಿಸಿರುತ್ತಾರೆ. ಮೈಸೂರು ಹೋಮಿಯೋಪತಿ ಪ್ರಾಕ್ಟಿಷನರ್ಸ್ ವಿಧೇಯಕ 1961 ರನ್ನು ಸರ್ಕಾರದಿಂದ ಅಂಗೀಕರಿಸಲ್ಪಡುವಲ್ಲಿ ಯಶಸ್ವಿಯಾಗಿರುತ್ತಾರೆ. 1973ರಲ್ಲಿ ಕೇಂದ್ರ ಸರಕಾರವು ರಚಿಸಿದ ಸೆಂಟ್ರಲ್ ಕಮಿಟಿ ಆಫ್ ಹೋಮಿಯೋಪತಿ ಇದರಲ್ಲಿ ಹದಿನೆಂಟು ವರ್ಷ ಭಾಗವಹಿಸಿದ ಯಶಸ್ಸು ಇವರದು. ಹೋಮಿಯೋಪತಿಯಲ್ಲಿ ವಿವಿಧ ರೋಗಗಳಿಗೆ ಉತ್ತಮ ಚಿಕಿತ್ಸೆ ನೀಡಿ ಯಶಸ್ವಿಯಾಗಿರುತ್ತಾರೆ. ಅಲ್ಲದೆ ಅಖಿಲ ಭಾರತ ಹೋಮಿಯೋಪತಿ ಸಮ್ಮೇಳನದಲ್ಲಿ ಹೊಮಿಯೋಪತಿಯಲ್ಲಿ ಅನೇಕ ವಿಷಯ ಮಂಡಿಸಿರುತ್ತಾರೆ.

ಇವರು ಹೋಮಿಯೋಪತಿಯಲ್ಲಿ ಸಲ್ಲಿಸಿದ ವಿಶಿಷ್ಟ ಸೇವೆಯನ್ನು ಪರಿಗಣಿಸಿ ಕರ್ನಾಟಕ ಸರ್ಕಾರವು 1998ನೇ ಸಾಲಿನ ''ಹ್ಯಾನಿಮನ್'' ಸ್ವರ್ಣ ಪದಕವನ್ನು ನೀಡಿ ಗೌರವಿಸಿದೆ.





ಡಾ॥ ಮುಜಿರುಲ್ಲ ಹಸನ್

## ಯುನಾನಿ ಪದ್ಧತಿ

ಡಾ॥ ಮುಜಿರುಲ್ಲ ಹಸನ್ ಇವರು 1936ರಲ್ಲಿ ಜನಿಸಿದರು. ಇವರು ಜಿ.ಸಿ.ಐ.ಎಂ. ಮತ್ತು ಜಿ.ಸಿ.ಯು.ಎಂ. ಪದವಿಯನ್ನು ಪಡೆದಿರುತ್ತಾರೆ. ಇವರು ಯುನಾನಿ ಪದ್ಧತಿಯಲ್ಲಿ ನಾನಾ ರೋಗಗಳಿಗೆ ಚಿಕಿತ್ಸೆ ನೀಡುವುದರ ಮೂಲಕ ಜನಪ್ರಿಯರಾಗಿರುತ್ತಾರೆ.

ಇವರು ಯುನಾನಿ ಪದ್ದತಿಯಲ್ಲಿ ಸಲ್ಲಿಸಿದ ಸೇವೆಯನ್ನು ಪರಿಗಣಿಸಿ ಕರ್ನಾಟಕ ಸರ್ಕಾರವು 1998ರ ''ಅವಿಸಿನ್ನ'' ಸ್ವರ್ಣ ಪದಕವನ್ನು ನೀಡಿ ಗೌರವಿಸಿದೆ.





ಶ್ರೀ ಎ.ಎಸ್.ನರಸಿಂಹಮೂರ್ತಿ

## ಯೋಗ ಮತ್ತು ಪ್ರಕೃತಿ ಚಿಕಿತ್ಸೆ

ಶ್ರೀ ಎ.ಎಸ್.ನರಸಿಂಹಮೂರ್ತಿ ಇವರು 1936ರಲ್ಲಿ ಬೆಂಗಳೂರು ದಕ್ಷಿಣ ತಾಲ್ಲೂಕ್ ಅಗರ ಗ್ರಾಮದಲ್ಲಿ ಜನಿಸಿದರು. ಇವರು ಮೈಸೂರು ವಿಶ್ವವಿದ್ಯಾಲಯದಿಂದ ಸಸ್ಯಶಾಸ್ತ್ರದಲ್ಲಿ ಎಂ.ಎಸ್‌ಸಿ., ಸ್ನಾತಕೋತ್ತರ ಪದವಿಯನ್ನು ಪಡೆದು ಕೇಂದ್ರ ಸರ್ಕಾರದ ಅಕೌಂಟೆಂಟ್ ಜನರಲ್ ಕಛೇರಿಯಲ್ಲಿ ಸೇವೆಸಲ್ಲಿಸಿ ನಿವೃತ್ತರಾಗಿರುತ್ತಾರೆ. ಇವರು ಸುಪ್ರಸಿದ್ದ ಯೋಗತಜ್ಞರಾದ ಡಾ॥ಸ್ವಾಮಿಗೀತಾನಂದ, ಆನಂದ ಆಶ್ರಮ, ಪಾಂಡಿಚೆರಿ ಇವರಿಂದ ಯೋಗ ವಿದ್ಯೆಯನ್ನು ಪಡೆದು ನಂತರ ವೇದವಿದ್ಯೆ ಪಾರಂಗತರಾದ ಶ್ರೀಮನ್ ಚಂದ್ರಶೇಖರ್ ಭಟ್ಟರಲ್ಲಿ ವೇದಾಧ್ಯಯನ ಮಾಡಿ ವೇದ ಪಾರಂಗತರಾಗಿರುತ್ತಾರೆ. 1968ರಲ್ಲಿ ತಮ್ಮ ಸ್ನೇಹಿತರೊಡಗೂಡಿ ಆಧ್ಯಾತ್ಮ ಸಾಧನ ಸಂಘವನ್ನು ಸ್ಥಾಪಿಸಿ ಯೋಗಶಿಕ್ಷಣ ತರಗತಿಗಳನ್ನು ನಡೆಸಿ ಜನರಲ್ಲಿ ಯೋಗದ ಬಗ್ಗೆ ತಿಳುವಳಿಕೆ ಮೂಡಲು ಕಾರಣರಾಗಿರುತ್ತಾರೆ. 1974ರಲ್ಲಿ ತಮ್ಮದೇ ಆದ ಶ್ರೀ ಆದಿಶಂಕರ ಯೋಗ ಕೇಂದ್ರವನ್ನು ಸ್ಥಾಪಿಸಿ ಅಂದಿನಿಂದ ಇಂದಿನವರೆಗೂ ಯೋಗಶಿಕ್ಷಣವನ್ನು ನೀಡುತ್ತಾ ಬಂದಿರುತ್ತಾರೆ. ಇವರು ಯೋಗಕ್ಷೇತ್ರದಲ್ಲಿ ಅನೇಕ ಪುಸ್ತಕಗಳನ್ನು ರಚಿಸಿರುತ್ತಾರೆ ಅಲ್ಲದೆ ವಿಶ್ರಾಂತಿ ಕ್ರಿಯೆಗಳು ಧ್ಯಾನದ ಅನೇಕ ಪ್ರಕ್ರಿಯೆಗಳ 10 ಧ್ವನಿ ಸುರಳಿಗಳನ್ನು ಹೊರತಂದಿರುತ್ತಾರೆ. ಇವರ ಸಾಮಾಜಿಕ ಹಾಗೂ ಯೋಗ ಕ್ಷೇತ್ರದಲ್ಲಿನ ನಿಸ್ವಾರ್ಥ ಸೇವೆಗಾಗಿ ರಾಜ್ಯಮಟ್ಟದ ''ಯೋಗ ಶ್ರೀ'' ಪ್ರಶಸ್ತಿ ಹಾಗೂ ರಾಷ್ಟ್ರಮಟ್ಟದ ''ವಿದ್ಯಾರತ್ನ'' ಪ್ರಶಸ್ತಿ ಪಡೆದಿರುತ್ತಾರೆ.

ಇವರು ಯೋಗ ಮತ್ತು ಪ್ರಕೃತಿ ಚಿಕಿತ್ಸೆಯಲ್ಲಿ ಸಲ್ಲಿಸಿದ ವಿಶಿಷ್ಟ ಸೇವೆಯನ್ನು ಪರಿಗಣಿಸಿ ಕರ್ನಾಟಕ ಸರ್ಕಾರವು ಇವರಿಗೆ 1998ನೇ ಸಾಲಿನ ''ಪತಂಜಲಿ'' ಸ್ವರ್ಣ ಪದಕವನ್ನು ನೀಡಿ ಗೌರವಿಸಿದೆ.





ಡಾ|| ಜಯಪ್ರಕಾಶ್ ನಾರಾಯಣ್

## ಆಯುರ್ವೇದ ಪದ್ಧತಿ

ಡಾ|| ಜಯಪ್ರಕಾಶ್ ನಾರಾಯಣ್ ಇವರು 1945ರಲ್ಲಿ ಬೆಂಗಳೂರಿನಲ್ಲಿ ಜನಿಸಿರುತ್ತಾರೆ. ಇವರ ತಂದೆ ಸುಪ್ರಸಿದ್ಧ ಆಯುರ್ವೇದ ರತ್ನ ಡಾ. ಬಿ.ಎಸ್.ವಿ. ಪಂಡಿತರು. ಇವರು 1973 ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದಿಂದ ಬಿ.ಎಸ್.ಎ.ಎಂ., ಪದವಿಯನ್ನು ನಂತರ 1979ರಲ್ಲಿ ಮೈಸೂರು ವಿಶ್ವವಿದ್ಯಾಲಯದಿಂದ ಅಲೋಪತಿಯಲ್ಲಿ ಎಂ.ಬಿ.ಬಿ.ಎಸ್., ಪದವಿಯನ್ನು ಹಾಗು 1985ರಲ್ಲಿ ಬೆಂಗಳೂರು ವಿಶ್ವವಿದ್ಯಾಲಯದಿಂದ ಆಯುರ್ವೇದದಲ್ಲಿ ಎಂ.ಡಿ. ಪದವಿಯನ್ನು ಪಡೆದಿರುತ್ತಾರೆ. ಆಯುರ್ವೇದದಲ್ಲಿ ಸ್ನಾತಕೋತ್ತರ ಪದವಿ ಮತ್ತು ಅಲೋಪತಿಯಲ್ಲಿ ಪದವಿ ಹೀಗೆ ಎರಡೂ ಪದ್ಧತಿಯಲ್ಲಿ ಶಿಕ್ಷಣ ಪಡೆದ ಹೆಗ್ಗಳಿಕೆ ಇವರದು. ಇವರು ಕರ್ನಾಟಕ ಆಯುರ್ವೇದ ಮತ್ತು ಯುನಾನಿ ವೈದ್ಯ ಮಂಡಳಿಯ ಅಧ್ಯಕ್ಷರಾಗಿ 1987 ರಿಂದ 1991ರವರೆಗೆ ಕಾರ್ಯನಿರ್ವಹಿಸಿರುತ್ತಾರೆ. ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಮಟ್ಟದ ಸಮ್ಮೇಳನಗಳಲ್ಲಿ ಆಯುರ್ವೇದಲ್ಲಿ ಅನೇಕ ಪ್ರಬಂಧಗಳನ್ನು ಮಂಡಿಸಿ ಆಯುರ್ವೇದ ಪ್ರಸಿದ್ಧಿಗೆ ಶ್ರಮಿಸಿರುತ್ತಾರೆ.

ಆಯುರ್ವೇದದಲ್ಲಿಯ ಇವರ ಸೇವೆಯನ್ನು ಪರಿಗಣಿಸಿ ಇವರಿಗೆ ರಾಷ್ಟ್ರೀಯ ಮತ್ತು ಅಂತರ್ರಾಷ್ಟ್ರೀಯ ಮಟ್ಟದಲ್ಲಿ ಅನೇಕ ಸನ್ಮಾನ ಮತ್ತು ಪ್ರಶಸ್ತಿಗಳು ಹಾಗೂ 1996ರಲ್ಲಿ ಕನ್ನಡ ರಾಜ್ಯೋತ್ಸವ ಪ್ರಶಸ್ತಿಯು ಇವರಿಗೆ ಲಭಿಸಿದೆ. ಹಾಲಿ ಇವರು ಸೆಂಟ್ರಲ್ ಕೌನ್ಸಿಲ್ ಆಫ್ ಇಂಡಿಯನ್ ಮೆಡಿಸಿನ್, ನವದೆಹಲಿಯ ಸದಸ್ಯರಾಗಿರುತ್ತಾರೆ. ಕರ್ನಾಟಕ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಹೆಲ್ತ್ ಟಾಸ್ಕ್ ಫೋರ್ಸ್‌ನ ಹಾಲಿ ಸದಸ್ಯರಾಗಿರುತ್ತಾರೆ. ಅನೇಕ ವಿದೇಶಗಳಲ್ಲಿ ಆಯುರ್ವೇದ ತಜ್ಞರಾಗಿ ವೈದ್ಯರಾಗಿ ಸೇವೆಸಲ್ಲಿಸುತ್ತಿದ್ದಾರೆ.

ಇವರು ಆಯುರ್ವೇದದ ಅಭಿವೃದ್ಧಿಗೆ ಸಲ್ಲಿಸಿದ ವಿಶಿಷ್ಟ ಸೇವೆಗಾಗಿ ಕರ್ನಾಟಕ ಸರ್ಕಾರವು ಇವರಿಗೆ 1999ನೇ ಸಾಲಿನ ''ಧನ್ವಂತರಿ'' ಸ್ವರ್ಣ ಪದಕವನ್ನು ನೀಡಿ ಗೌರವಿಸಿದೆ.





ಡಾ|| ಕೆ.ವಿ. ಸುಬ್ಬರಾವ್

## ಹೋಮಿಯೋಪತಿ ಪದ್ಧತಿ

ಡಾ|| ಕೆ.ವಿ. ಸುಬ್ಬರಾವ್ ಇವರು 1920ರಲ್ಲಿ ಜನಿಸಿರುತ್ತಾರೆ. ಇವರು ಸುಮಾರು 40 ವರ್ಷಗಳಿಂದ ಹೋಮಿಯೋಪತಿಯಲ್ಲಿ ಚಿಕಿತ್ಸೆ ನೀಡಿ ಜನಪ್ರಿಯರಾಗಿರುತ್ತಾರೆ. ಅಲ್ಲದೆ ಕಂಪ್ಯೂಟರ್ ಮೂಲಕ ಹೋಮಿಯೋಪತಿ ಚಿಕಿತ್ಸೆ ಮತ್ತು ಹೋಮಿಯೋಪತಿ ಗೃಹ ಕೈಪಿಡಿಯನ್ನು ಕನ್ನಡದಲ್ಲಿ ಪ್ರಕಟಿಸಿರುತ್ತಾರೆ.

ಇವರ ಹೋಮಿಯೋಪತಿಯಲ್ಲಿಯ ವಿಶಿಷ್ಟ ಸೇವೆಯನ್ನು ಪರಿಗಣಿಸಿ ಕರ್ನಾಟಕ ಸರ್ಕಾರವು 1999ನೇ ಸಾಲಿನ ''ಹ್ಯಾನಿಮನ್'' ಸ್ವರ್ಣ ಪದಕವನ್ನು ನೀಡಿ ಗೌರವಿಸಿದೆ.





ಶ್ರೀ ಜಿ. ವೀರಭದ್ರಪ್ಪ

## ಯೋಗ ಮತ್ತು ಪ್ರಕೃತಿ ಚಿಕಿತ್ಸೆ

ಶ್ರೀ ಜಿ. ವೀರಭದ್ರಪ್ಪ ಇವರು 1946ರಲ್ಲಿ ಜನಿಸಿರುತ್ತಾರೆ. ಮಲ್ಲಾಡಿಹಳ್ಳಿಯ ಸ್ವಾಮಿಗಳ ಶಿಷ್ಯರಾಗಿದ್ದ ಶ್ರೀ. ಎ.ಎಸ್. ಮೂರ್ತಿಯವರಿಂದ ಯೋಗಾಸನ, ಪ್ರಾಣಯಾಮ, ಪ್ರಕೃತಿ ಚಿಕಿತ್ಸೆತರಬೇತಿ ಪಡೆದಿರುತ್ತಾರೆ. ರಾಜ್ಯದಲ್ಲಿ ನಡೆದ ಅನೇಕ ಯೋಗಾಸನ ಸ್ಪರ್ಧೆಗಳಲ್ಲಿ ಭಾಗವಹಿಸಿ ಅಲ್ಲಿ ಯೋಗಾಸನ ಮತ್ತು ಪ್ರಕೃತಿ ಚಿಕಿತ್ಸೆ ಬಗ್ಗೆ ಜನರಲ್ಲಿ ವಿಶ್ವಾಸ ಮೂಡಿಸಿರುತ್ತಾರೆ. ಇವರು ಓಂಕಾರ ಯೋಗ ಪರಿಷತ್ತನ್ನು ದಾವಣಗೆರೆಯಲ್ಲಿ ಸ್ಥಾಪಿಸಿ ಅದರ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಬೇಸಿಗೆಯಲ್ಲಿ ಶಾಲಾ ಮಕ್ಕಳಿಗೆ ಯೋಗ ಶಿಬಿರವನ್ನು ನಡೆಸುವುದರ ಮೂಲಕ ಅವರಲ್ಲಿ ಯೋಗ ಮತ್ತು ಪ್ರಕೃತಿ ಚಿಕಿತ್ಸೆ ಬಗ್ಗೆ ತಿಳುವಳಿಕೆ ಮೂಡುವಂತೆ ಮಾಡಿರುತ್ತಾರೆ. ಹಾಗೂ ಬಂಧಿಖಾನೆಯಲ್ಲಿ ಕೈದಿಗಳಿಗೆ ಯೋಗ ಮತ್ತು ಪ್ರಕೃತಿ ಚಿಕಿತ್ಸೆ ಮೂಲಕ ಅವರುಗಳ ಮನಪರಿವರ್ತನೆ ಮಾಡುವುದರಲ್ಲಿ ಶ್ರಮಿಸಿರುತ್ತಾರೆ. ಅಂತರರಾಷ್ಟ್ರೀಯಮಟ್ಟದಲ್ಲಿ ನಡೆದ ಯೋಗ ಸ್ಪರ್ಧೆಗಳಲ್ಲಿ ರಾಜ್ಯ ತಂಡದ ಮ್ಯಾನೇಜರಾಗಿ ಕಾರ್ಯನಿರ್ವಹಿಸಿರುತ್ತಾರೆ.

ಇವರು ಯೋಗ ಮತ್ತು ಪ್ರಕೃತಿ ಚಿಕಿತ್ಸೆಯಲ್ಲಿ ಸಲ್ಲಿಸಿದ ಸೇವೆಯನ್ನು ಪರಿಗಣಿಸಿ ಕರ್ನಾಟಕ ಸರ್ಕಾರವು ಇವರಿಗೆ 1999ನೇ ಸಾಲಿನ ''ಪತಂಜಲಿ'' ಸ್ವರ್ಣ ಪದಕವನ್ನು ನೀಡಿ ಗೌರವಿಸಿದೆ.





ಡಾ|| ಸೀತಾರಾಂ

## ಆಯುರ್ವೇದ ಪದ್ಧತಿ

ಡಾ|| ಸೀತಾರಾಂ ಇವರು 1927ರಲ್ಲಿ ಜನಿಸಿರುತ್ತಾರೆ. ಇವರು ಬಿ.ಎಸ್‌ಸಿ. ಪದವಿಯನ್ನು ಮುಗಿಸಿದ ನಂತರ ಎಲ್.ಎ.ಎಂ.ಎಸ್. ಪದವಿಯನ್ನು ಮೈಸೂರು ವಿಶ್ವವಿದ್ಯಾಲಯದಿಂದ ಪಡೆದಿರುತ್ತಾರೆ. ಇವರು ಆಯುರ್ವೇದ ಪ್ರಚಾರ ಪರಿಷತ್ ಅಧ್ಯಕ್ಷರಾಗಿ ಆಯುರ್ವೇದ ಶಾಸ್ತ್ರದ ಆಧಾರದ ಮೇಲೆ ಪ್ರತಿಭಾವಂತ ವೈದ್ಯರುಗಳಿಂದ ಉಚಿತ ಚಿಕಿತ್ಸಾ ಶಿಬಿರಗಳನ್ನು ನಡೆಸಿರುತ್ತಾರೆ. ಇವರು ವೈದ್ಯವಾರ್ತಾ ಮಾಸಪತ್ರಿಕೆಯ ಸಂಪಾದಕ ಮಂಡಳಿಯ ಅಧ್ಯಕ್ಷರಾಗಿ ಪತ್ರಿಕೆಯ ಮೂಲಕ ಆಯುರ್ವೇದದ ಅಭಿವೃದ್ಧಿಗೆ ಶ್ರಮಿಸಿರುತ್ತಾರೆ.

ಇವರು ಆಯುರ್ವೇದ ವೈದ್ಯರ ಸಹಕಾರ ಸಂಘವನ್ನು ಸ್ಥಾಪಿಸಿ ಅದರ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿರುತ್ತಾರೆ. ತಮ್ಮ ಜಮೀನಿನಲ್ಲಿ ಔಷಧಯುಕ್ತ ಮೂಲಿಕೆಗಳನ್ನು ಮತ್ತು ಇನ್ನಿತರ ಅಪೂರ್ವವಾದ ಸಸ್ಯಗಳ ಮೂಲಿಕಾವನವನ್ನು ಬೆಳೆಸಿ ಆಯುರ್ವೇದದ ಅಭಿವೃದ್ಧಿಗೆ ಶ್ರಮಿಸಿರುತ್ತಾರೆ. ಇವರು ಆಯುರ್ವೇದದಲ್ಲಿ ಸಲ್ಲಿಸಿದ ಸೇವೆಯನ್ನು ಗುರುತಿಸಿ ಅನೇಕ ಸಂಘ ಸಂಸ್ಥೆಗಳು ಇವರನ್ನು ಸನ್ಮಾನಿಸಿ ಪ್ರಶಸ್ತಿಗಳನ್ನು ನೀಡಿ ಗೌರವಿಸಿರುತ್ತಾರೆ.

ಇವರ ಸೇವೆಯನ್ನು ಪರಿಗಣಿಸಿ ಕರ್ನಾಟಕ ಸರ್ಕಾರ ಇವರಿಗೆ 2000ನೇ ಸಾಲಿನ ''ಧನ್ವಂತರಿ'' ಸ್ವರ್ಣಪದಕವನ್ನು ನೀಡಿ ಗೌರವಿಸಿದೆ.





ಡಾ|| ಸೈಯದ್ ಅಹಮದುಲ್ಲ

## ಯುನಾನಿ ಪದ್ಧತಿ

ಡಾ|| ಸೈಯದ್ ಅಹಮದುಲ್ಲ ಇವರು 1941ರಲ್ಲಿ ಜನಿಸಿದರು ಇವರು ಉಸ್ಮಾನಿಯ ವಿಶ್ವವಿದ್ಯಾಲಯದಿಂದ ಜಿ.ಸಿ.ಯು.ಎಂ., ಮತ್ತು ಜಿ.ಸಿ.ಐ.ಎಂ., ಪದವಿಯನ್ನು ಪಡೆದು 1968ರಲ್ಲಿ ಯುನಾನಿ ಚಿಕಿತ್ಸಕರಾಗಿ ಸರ್ಕಾರಿ ಸೇವೆಗೆ ಸೇರಿ ಸುಮಾರು 31 ವರ್ಷಗಳ ಸರ್ಕಾರಿ ಸೇವೆಯನ್ನು ಮಾಡಿ 1999ರಲ್ಲಿ, ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿರುತ್ತಾರೆ. ಇವರು ಯುನಾನಿ ಪದ್ಧತಿಯಲ್ಲಿ ನಡೆದ ಸೆಮಿನಾರುಗಳಲ್ಲಿ ಅನೇಕ ಪ್ರಬಂಧಗಳನ್ನು ಮಂಡಿಸಿರುತ್ತಾರೆ. ಇವರು ಉಚಿತ ಆರೋಗ್ಯ ಶಿಬಿರಗಳನ್ನು (ಮೆಡಿಕಲ್ ಕ್ಯಾಂಪ್) ನಡೆಸಿ ಯುನಾನಿ ಪದ್ಧತಿ ಔಷಧಿ ಮೂಲಕ ರೋಗಿಗಳಿಗೆ ಚಿಕಿತ್ಸೆ ನೀಡಿರುತ್ತಾರೆ.

ಇವರು ಯುನಾನಿ ಪದ್ಧತಿಯಲ್ಲಿ ಸಲ್ಲಿಸಿದ ಸೇವೆಯನ್ನು ಪರಿಗಣಿಸಿ ಕರ್ನಾಟಕ ಸರ್ಕಾರವು ಇವರಿಗೆ 2000ನೇ ಸಾಲಿನ ''ಅವಿಸಿನ್ನ'' ಸ್ವರ್ಣ ಪದಕವನ್ನು ನೀಡಿ ಗೌರವಿಸಿದೆ.



## ಪ್ರಕೃತಿ ಚಿಕಿತ್ಸೆ ಮತ್ತು ಯೋಗ

ಶ್ರೀ ಬಿ.ಎನ್. ಬ್ರಹ್ಮಾಚಾರ್ಯ

ಶ್ರೀ ಬಿ.ಎನ್. ಬ್ರಹ್ಮಾಚಾರ್ಯ ಇವರು ತುಮಕೂರು ಜಿಲ್ಲೆಯಲ್ಲಿ 1948ರಲ್ಲಿ ಜನಿಸಿರುತ್ತಾರೆ. ಇವರು ಬಿ.ಎಸ್.ಸಿ. ಪದವಿಯನ್ನು ಪಡೆದು ಸಹಕಾರಿ ಇಲಾಖೆಯಲ್ಲಿ ಸೇವೆ ಸಲ್ಲಿಸಿರುತ್ತಾರೆ. ಹಿರಿಯ ಪ್ರಕೃತಿ ಚಿಕಿತ್ಸಕರಾದ ಡಾ|| ಎಂ.ಜಿ.ಎಸ್. ರಾಜನ್, ಡಾ|| ಲಕ್ಷ್ಮಣ ಶರ್ಮ ಮುಂತಾದವರ ಸಂಪರ್ಕದಿಂದ ಪ್ರಕೃತಿ ಚಿಕಿತ್ಸೆಯಲ್ಲಿ ತರಬೇತಿ ಪಡೆದಿರುತ್ತಾರೆ. ಇವರು ರಾಜ್ಯದ ಹಾಗು ಹೊರ ರಾಜ್ಯದ ಅನೇಕ ಕಡೆಗಳಲ್ಲಿ ಯೋಗ ಸ್ಪರ್ಧೆಗಳಲ್ಲಿ ಹಿರಿಯ ತೀರ್ಪುಗಾರರಾಗಿ ಭಾಗವಹಿಸಿರುತ್ತಾರೆ ಮತ್ತು ಯೋಗ ಸಮ್ಮೇಳನಗಳಲ್ಲಿ ಪ್ರಬಂಧಗಳನ್ನು ಮಂಡಿಸಿರುತ್ತಾರೆ. ಶಾಲೆಗಳಲ್ಲಿ ಯೋಗ ಅಳವಡಿಸಲು ರಾಜ್ಯ ಸರ್ಕಾರ ರಚಿಸಿದ ತಜ್ಞರ ಸಲಹಾ ಸಮಿತಿ ಸದಸ್ಯರಾಗಿರುತ್ತಾರೆ. ಹಾಲಿ ಇವರು ಭಾರತೀಯ ವೈದ್ಯ ಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆಯಲ್ಲಿ ಪ್ರಕೃತಿ ಚಿಕಿತ್ಸೆ ಯೋಗ ಪ್ರಚಾರಕರಾಗಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿದ್ದಾರೆ.

ಇವರು ಯೋಗ ಮತ್ತು ಪ್ರಕೃತಿ ಚಿಕಿತ್ಸೆಯಲ್ಲಿ ಸಲ್ಲಿಸಿದ ಸೇವೆಯನ್ನು ಪರಿಗಣಿಸಿ ಕರ್ನಾಟಕ ಸರ್ಕಾರವು ಇವರಿಗೆ 2000ನೇ ಸಾಲಿನ ''ಪತಂಜಲಿ'' ಸ್ವರ್ಣ ಪದಕವನ್ನು ನೀಡಿ ಗೌರವಿಸಿದೆ.